

# ಕರ್ನಾಟಕ  ವಿಧಾನ ಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 31-03-2021 ಪ್ರಶ್ನೆ ಸಂಖ್ಯೆ : 3035 (2462)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಎನ್. ರವಿಕುಮಾರ್ (ವಿಧಾನಸಭೆಯಿಂದ ಚುನಾಯಿತರಾದವರು)

ಉತ್ತರ ನೀಡಬೇಕಾದ ದಿನಾಂಕ : 31-03-2021

ಉತ್ತರಿಸುವ ಸಚಿವರು: ಮುಜರಾಯಿ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು

ವಿಷಯ : ಓ.ಬಿ.ಸಿ ಹಾಸ್ಟೆಲ್‌ಗಳ ಅಡುಗೆ ಕೆಲಸಗಾರರು ಕುರಿತು

(ಅ) ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ಹಾಸ್ಟೆಲ್‌ಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅಡುಗೆ ಕೆಲಸಗಾರರು ಮತ್ತು ಅಡುಗೆ ಸಹಾಯಕರುಗಳ ಸಂಖ್ಯೆ ಎಷ್ಟು; ಇದರಲ್ಲಿ ಗುತ್ತಿಗೆ, ಹೊರಗುತ್ತಿಗೆ ನೌಕರರ ಸಂಖ್ಯೆ ಎಷ್ಟು ; (ಜಿಲ್ಲಾವಾರು ಮಾಹಿತಿ ನೀಡುವುದು)

(ಆ) ಅಡುಗೆ ಕೆಲಸಗಾರರು ಮತ್ತು ಅಡುಗೆ ಸಹಾಯಕರುಗಳಿಗೆ ನೀಡುವ ವೇತನವೆಷ್ಟು; ಗುತ್ತಿಗೆ, ಹೊರಗುತ್ತಿಗೆ ನೌಕರರಿಗೆ ನಿಗದಿಪಡಿಸಿದ ವೇತನ ಎಷ್ಟು ;

(ಇ) ಸದರಿಯವರುಗಳಿಗೆ ವಾರದ ರಜೆ ನೀಡಲಾಗುತ್ತದೆಯೇ ; ಹೌದಲ್ಲಿ, ತಿಂಗಳಿಗೆ ಎಷ್ಟು ರಜೆಗಳನ್ನು ನೀಡಲಾಗುತ್ತದೆ ; ಹಬ್ಬದ ದಿನಗಳಲ್ಲಿ ರಜೆ ನೀಡಲಾಗುತ್ತದೆಯೇ ;

(ಈ) ಸದರಿಯವರಿಗೆ ವಾರದ ರಜೆ ನೀಡಲು ಸಾಧ್ಯವಾಗದಿದ್ದಲ್ಲಿ ಪೊಲೀಸ್ ಇಲಾಖೆಯಲ್ಲಿ ನೀಡುವಂತೆ ವರ್ಷಕ್ಕೊಂದು ಬಾರಿ ಒಂದು ತಿಂಗಳ ವೇತನ ನೀಡುವ ಕುರಿತು ಸರ್ಕಾರದ ನಿಲುವೇನು; ಎಂದಿನಿಂದ ಈ ಕ್ರಮ ಜಾರಿಗೆ ಬರುತ್ತದೆ ?